# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 171(1441)

ಸದಸ್ಯರ ಹೆಸರು : ಶ್ರೀ ಭಾನುಪ್ರಕಾಶ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾಗಿದ್ದ ದಿನಾಂಕ : 28.02.2018

ಉತ್ತರಿಸುವವರು : ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು

*****

| | ಪ್ರಶ್ನೆ | ಉತ್ತರ |
|---|---|---|
| ಅ | ಕಾಮಗಾರಿಗಳಿಗೆ ಅರಣ್ಯ ಇಲಾಖೆ ಅನುಮತಿ ನೀಡುವಾಗ ಮರಗಳನ್ನು ತೆರವುಗೊಳಿಸುವ ಸಂಬಂಧ ವಿಧಿಸುವ ನಿಬಂಧನೆಗಳೇನು; (ವಿವರ ನೀಡುವುದು) | ಅರಣ್ಯ ಪ್ರದೇಶದಲ್ಲಿ ಅರಣ್ಯೇತರ ಉದ್ದೇಶಗಳಿಗೆ ಮರಗಳನ್ನು ತೆರವುಗೊಳಿಸುವ ಸಂಬಂಧ, ಅರಣ್ಯ ಸಂರಕ್ಷಣಾ ಕಾಯ್ದೆ 1980 ರಂತೆ ಕ್ರಮಕೈಗೊಳ್ಳಲಾಗುತ್ತದೆ.<br><br>ಸರ್ಕಾರಿ ಜಮೀನುಗಳಲ್ಲಿ ಕಾಮಗಾರಿಗಳಿಗೆ ಮರಗಳನ್ನು ತೆರವುಗೊಳಿಸುವ ಸಂಬಂಧ, ಅನುಮತಿ ನೀಡುವಾಗ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಅರಣ್ಯ ಪಡೆ ಮುಖ್ಯಸ್ಥರು) ರವರ ಅನಧಿಕೃತ ಜ್ಞಾಪನ ಪತ್ರ ಸಂಖ್ಯೆ: ಬಿ7/ಬಿಯುಡಿ/ಸಿಆರ್-14/2015-16 ದಿನಾಂಕ 26.10.2015 ರಲ್ಲಿ ವಿಧಿಸಲಾಗಿರುವ ನಿಬಂಧನೆಗಳಂತೆ ಕ್ರಮ ಕೈಗೊಳ್ಳಲಾಗುತ್ತದೆ. ಅನಧಿಕೃತ ಜ್ಞಾಪನ ಪತ್ರದ ಪ್ರತಿಯನ್ನು ಅನುಬಂಧ-1ರಲ್ಲಿರಿಸಲಾಗಿದೆ.<br><br>ಖಾಸಗೀ ಜಮೀನುಗಳಲ್ಲಿ ಮರಗಳನ್ನು ತೆರವುಗೊಳಿಸುವ ಸಂಬಂಧ, ಕರ್ನಾಟಕ ವೃಕ್ಷ ಸಂರಕ್ಷಣಾ ಕಾಯ್ದೆ, 1976, ಸೆಕ್ಷನ್ 8 ಮತ್ತು 9 ರಲ್ಲಿ ವಿಧಿಸಿರುವ ನಿಬಂಧನೆಗಳಂತೆ ಮರಗಳನ್ನು ತೆರವು ಗೊಳಿಸಲಾಗುವುದು. |
| ಆ | ಈ ನಿಯಮಗಳನ್ನು ಪಾಲಿಸುವ ಬಗ್ಗೆ ತೆಗೆದುಕೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಅರಣ್ಯೇತರ ಉದ್ದೇಶಗಳಿಗೆ ಮರಗಳನ್ನು ತೆರವುಗೊಳಿಸಿದಲ್ಲಿ ಉಪಯೋಗಿ ಸಂಸ್ಥೆಯಿಂದ ಪರಿಹಾರಾತ್ಮಕ ನೆಡುತೋಪು ಬೆಳೆಸಿ ನಿರ್ವಹಣೆ ಮಾಡಲು ಕ್ರಮಕೈಗೊಳ್ಳಲಾಗುತ್ತದೆ.<br><br>ಸರ್ಕಾರಿ ಜಮೀನುಗಳಲ್ಲಿ ಮರಗಳನ್ನು ತೆರುವುಗೊಳಿಸಿದಲ್ಲಿ ಉಪಯೋಗಿ ಸಂಸ್ಥೆಯಿಂದ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಅರಣ್ಯ ಪಡೆ ಮುಖ್ಯಸ್ಥರು) ರವರ ಅನಧಿಕೃತ ಜ್ಞಾಪನ ಪತ್ರ ಸಂಖ್ಯೆ: ಬಿ7/ಬಿಯುಡಿ/ಸಿಆರ್-14/2015-16 ದಿನಾಂಕ 26.10.2015 ರಲ್ಲಿ ವಿಧಿಸಲಾಗಿರುವ ನಿಬಂಧನೆಗಳಂತೆ ಕ್ರಮ ಕೈಗೊಳ್ಳಲಾಗುತ್ತದೆ.<br><br>ಖಾಸಗೀ ಜಮೀನುಗಳಲ್ಲಿ ಮರಗಳನ್ನು ತೆರವುಗೊಳಿಸಿದಲ್ಲಿ ಕರ್ನಾಟಕ ವೃಕ್ಷ ಸಂರಕ್ಷಣಾ ಕಾಯ್ದೆ, 1976, ಸೆಕ್ಷನ್ 9 ರಲ್ಲಿ ವಿಧಿಸಿರುವ ನಿಬಂಧನೆಗಳಂತೆ ಕ್ರಮಕೈಗೊಳ್ಳಲಾಗುತ್ತದೆ. |

| | | |
|---|---|---|
| ಇ | ಕಳೆದ ನಾಲ್ಕು ವರ್ಷಗಳಲ್ಲಿ ಎಷ್ಟು ಕಾಮಗಾರಿಗಳಿಗೆ ಇಂತಹ ನಿಯಮಗಳನ್ನು ಅಳವಡಿಸಿ ಅನುಮತಿ ನೀಡಲಾಗಿದೆ; (ವಿವರ ನೀಡುವುದು) | 2014–15 – 53 ಕಾಮಗಾರಿಗಳು<br>2015–16 – 105 ಕಾಮಗಾರಿಗಳು<br>2016–17 – 95 ಕಾಮಗಾರಿಗಳು<br>2017–18 – 48 ಕಾಮಗಾರಿಗಳು |
| ಈ | ಮರ ಬೆಳೆಸುವ ಬಗ್ಗೆ ಉಸ್ತುವಾರಿ ನೋಡಿಕೊಳ್ಳುವ ಹೊಣೆ ಯಾರಿಗೆ ನೀಡಲಾಗಿದೆ? (ವಿವರ ನೀಡುವುದು) | ಮರ ಬೆಳೆಸುವ ಬಗ್ಗೆ ಪ್ರತಿ ಜಿಲ್ಲೆಯ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ವ್ಯಾಪ್ತಿಯಲ್ಲಿನ ವಲಯ ಅರಣ್ಯಾಧಿಕಾರಿ ಮತ್ತು ಅವರ ಅಧೀನ ಸಿಬ್ಬಂದಿಯವರಿಗೆ ಉಸ್ತುವಾರಿ ನೋಡಿಕೊಳ್ಳುವ ಹೊಣೆ ನೀಡಲಾಗಿರುತ್ತದೆ. |

**ಸಂಖ್ಯೆ: ಅಪಜೀ 23 ಎಫ್‌ಎಎಫ್ 2018**

(ಬಿ.ರಮಾನಾಥ ರೈ)
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು

## ಕರ್ನಾಟಕ ಅರಣ್ಯ ಇಲಾಖೆ

ಸಂಖ್ಯೆ:ಬಿ7/ಐಯುಡಿ/ಸಿಆರ್-14/2015-16

ಪ್ರಧಾನ ಮುಖ್ಯಅರಣ್ಯ ಸಂರಕ್ಷಣಾಧಿಕಾರಿ.
(ಅರಣ್ಯ ಪಡೆ ಮುಖ್ಯಸ್ಥರು)ರವರ ಕಛೇರಿ,
"ಅರಣ್ಯಭವನ", ಬೆಂಗಳೂರು,
ದಿನಾಂಕ: 26-10-2015.

### ಅಧಿಕೃತ ಜ್ಞಾಪನಾ ಪತ್ರ

ವಿಷಯ: KSHIP (ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ)ಯಡಿ/ಉಪಯೋಗಿ ಸಂಸ್ಥೆಗಳಿಂದ ರಸ್ತೆ ಅಗಲೀಕರಣದಿಂದ ತೆರವು ಮಾಡಲಾದ ರಸ್ತೆಬದಿ ಮರಗಳ ಬದಲಿಗೆ ಗಿಡನೆಡುವ ಅರಣ್ಯೀಕರಣ ಕೆಲಸಗಳಿಗೆ ಘಟಕದರ ನಿಗದಿ ಪಡಿಸಿದ ಬಗ್ಗೆ.

ಉಲ್ಲೇಖ: 1. ಈ ಕಛೇರಿ ಪತ್ರ ಸಂಖ್ಯೆ:ಎಃ(4)/ಕೆಶಿಪ್/ಸಿಆರ್-112/07-08, ದಿನಾಂಕ [illegible] 2011.

2. [illegible] ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಅಭಿವೃದ್ಧಿ) ರವರ ಕಛೇರಿ ಪತ್ರ ಸಂಖ್ಯೆ: ಬಿ7/ಐಯುಡಿ/ಸಿಆರ್-14/13-14, ದಿನಾಂಕ 12-09-2013.

* * * * *

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಯಡಿಯಲ್ಲಿ ರಸ್ತೆ ಅಗಲೀಕರಣ ಪ್ರಕ್ರಿಯೆಯ ತತ್ಪರಿಣಾಮವಾಗಿ ತೆರವು ಮಾಡಲಾದಂತಹ ಮರಗಳ ಬದಲಿಗೆ ಎತ್ತರವಾದಂತಹ ಸ್ಥಳೀಯ ಕಾಡು ಜಾತಿಯ ಸಸಿಗಳನ್ನು ರಸ್ತೆಬದಿಯಲ್ಲಿ ಬೆಳೆಸಿ ಪೋಷಿಸುವ ಕಾರ್ಯಕ್ರಮವು ರಾಜ್ಯದಲ್ಲಿ ಕಳೆದ ಒಂದು ದಶಕದಿಂದ ನಡೆದುಕೊಂಡು ಬರುತ್ತಿದೆ. ಈ ಕಾಮಗಾರಿಗೆ ಆಗುವ ವೆಚ್ಚವನ್ನು ಉಪಯೋಗಿ ಸಂಸ್ಥೆಗಳಿಂದ ಆಯಾ ಹಣಕಾಸಿನ ವರ್ಷದಲ್ಲಿ ಜಾರಿಯಲ್ಲಿರುವ ಎಸ್.ಎಸ್.ಆರ್.ನಂತೆ ಮುಂಗಡವಾಗಿ ಪಡೆದುಕೊಳ್ಳಲಾಗುತ್ತಿದೆ.

ಈ ನಿಟ್ಟಿನಲ್ಲಿ ಉಲ್ಲೇಖ (1) ರಲ್ಲಿ 2011-12ನೇ ಸಾಲಿನ ದರಗಳನ್ನು ಪರಿಗಣಿಸಿ ಸದರಿ ಕಾಮಗಾರಿಗೆ ಸಸಿ ಬೆಳೆಸುವುದನ್ನು ಹಿಡಿದು ಮುಂದಿನ 5 ವರ್ಷಗಳವರೆಗೆ ಬೆಳೆಸಿ ಪೋಷಿಸಲು ಬೇಕಾಗಿರುವಂತಹ ಮೊತ್ತವನ್ನು ಪ್ರತಿ ಗಿಡಕ್ಕೆ ರೂ.906/-ರಂತೆ (ವಾರ್ಷಿಕ ಶೇ.10ರಷ್ಟು Cost escalation ಸೇರಿ) ನಿಗದಿಪಡಿಸಲಾಗಿರುತ್ತದೆ.

ಉಲ್ಲೇಖ(2)ರ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಅಭಿವೃದ್ಧಿ), ಬೆಂಗಳೂರು ರವರು ಈ ದರವನ್ನು ಪರಿಷ್ಕರಿಸಿ ಗಿಡ ಒಂದಕ್ಕೆ ರೂ.1,182/-ಗಳನ್ನು 2013-14ನೇ ಸಾಲಿಗೆ ನಿಗದಿಪಡಿಸಿ ಉಪಯೋಗಿ ಸಂಸ್ಥೆಗಳಿಗೆ ಸೂಚಿಸಲಾಗಿದೆ.

ಹಾಲಿ 2015-16ನೇ ಸಾಲಿನಲ್ಲಿ ಜಾರಿಯಲ್ಲಿರುವ ಎಸ್.ಎಸ್.ಆರ್. ದರಗಳನ್ನು ಗಣನೆಗೆ ತೆಗೆದುಕೊಂಡು ಪ್ರತಿ ಗಿಡಕ್ಕೆ ಸಸ್ಯಕ್ಷೇತ್ರದಲ್ಲಿ ಸಸಿಗಳನ್ನು ಬೆಳೆಸಿ ಕ್ಷೇತ್ರದಲ್ಲಿ ನೆಟ್ಟು 5 ವರ್ಷಗಳವರೆಗೆ ಪೋಷಣೆ ಮಾಡಲು ಆಗುವ ವೆಚ್ಚವು ಈ ಕೆಳಗಿನಂತಿರುತ್ತದೆ.

| ಕ್ರ. ಸಂ | ವರ್ಷ | ಕಾಮಗಾರಿ ವಿವರ | ಘಟಕ ದರ (ಪ್ರತಿ ಕಿ.ಮೀ) |
|---|---|---|---|
| 1. | 2015-16 | ಮುಂಗಡ ಕಾಮಗಾರಿ ಮತ್ತು ಸಸಿ ಬೆಳೆಸುವುದು | 39,400/- |
| 2 | 2016-17 | ನೆಡುತೋಪು ನಿರ್ಮಾಣ | 72,380/- |
| 3 | 2017-18 | ಮೊದಲನೆ ವರ್ಷದ ನೆಡುತೋಪು ಪೋಷಣೆ | 52629/- |
| 4 | 2018-19 | ಎರಡನೆ ವರ್ಷದ ನೆಡುತೋಪು ಪೋಷಣೆ | 45,089/- |
| 5 | 2019-20 | ಮೂರನೆ ವರ್ಷದ ನೆಡುತೋಪು ಪೋಷಣೆ | 51,273/- |
| 6 | 2020-21 | ನಾಲ್ಕನೆ ವರ್ಷದ ನೆಡುತೋಪು ಪೋಷಣೆ | 56,400/- |
| 7 | 2021-22 | ಐದು ವರ್ಷದ ನೆಡುತೋಪು ಪೋಷಣೆ | 62,040/- |
| | | ಒಟ್ಟು : (1 ರಿಂದ 7 ರವರೆಗೆ) | 3,82,211/- |
| | | ಐದು ವರ್ಷಕ್ಕೆ ಪ್ರತಿ ಗಿಡ ಬೆಳೆಸಲು ತಗಲು ವೆಚ್ಚ | 1,911 /- |

ಮೇಲಿನ ವಿವರಗಳ ಹಿನ್ನೆಲೆಯಲ್ಲಿ 2015-16ನಲ್ಲಿ ಬರುವ ರಸ್ತೆ ಅಗಲೀಕರಣ ಪ್ರಸ್ತಾವನೆಗಳಿಗೆ ಪ್ರತಿ ಗಿಡಕ್ಕೆ ರೂ.1,911/-ಗಳು ಎಂದು ನಿಗದಿಪಡಿಸುವ ನಿಟ್ಟಿನಲ್ಲಿ ಈ ಕೆಳಕಂಡ ಆದೇಶ.

## ಆದೇಶ

ಮೇಲಿನ ಸಮರ್ಪಕ ಅಂಶಗಳ ಹಿನ್ನೆಲೆಯಲ್ಲಿ 2015-16ನೇ ಸಾಲಿನಲ್ಲಿ ರಸ್ತೆ ಅಗಲೀಕರಣ ಪ್ರಕ್ರಿಯೆಯಿಂದ ತೆಗೆಯಬೇಕಾದಂತಹ ಮರಗಳಲ್ಲದ ಸದರಿ ರಸ್ತೆಬದಿಯ ಉದ್ದಕ್ಕನುಗುಣವಾಗಿ ಬದಲಿಗೆ ಸಸಿಗಳನ್ನು ಬೆಳೆಸಿ, ರಸ್ತೆಬದಿ/ಕ್ಷೇತ್ರದಲ್ಲಿ ನೆಟ್ಟು, 5 ವರ್ಷಗಳವರೆಗೆ ಪೋಷಿಸುವಂತಹ ಒಟ್ಟಾರೆ ಕಾಮಗಾರಿಗೆ ಆಗುವ ವೆಚ್ಚವು ಪ್ರತಿ ಗಿಡಕ್ಕೆ ರೂ.1,911/-ರಂತೆ(ಪ್ರತಿ ಕಿ.ಮೀ.ಗೆ 14"x20" ಅಳತೆಯ 200 ಸಸಿಗಳು + 1 $m^3$ ಗುಂಡಿ)ನಿಗದಿಪಡಿಸಿ ಆದೇಶಿಸಿದೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ
(ಅರಣ್ಯ ಪಡೆ ಮುಖ್ಯಸ್ಥರು), ಬೆಂಗಳೂರು.

1. ಎಲ್ಲಾ ವೃತ್ತಗಳ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಮತ್ತು ಎಲ್ಲಾ ವಿಭಾಗಗಳ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಇವರಿಗೆ ಉಪಯೋಗಿ ಸಂಸ್ಥೆಗಳಿಂದ ರಸ್ತೆ ಅಗಲೀಕರಣದಿಂದ ಅಭಿವೃದ್ಧಿ ಪಡಿಸುವ ರಸ್ತೆಗಳ ಬದಿಯಲ್ಲಿ ನೆಡುತೋಪು ಬೆಳೆಸುವ ಕಾಮಗಾರಿಗೆ 2015-16ನೇ ಸಾಲಿನಲ್ಲಿ ತೆರವಾಗುವ ರಸ್ತೆಯ ಉದ್ದಕ್ಕನುಗುಣವಾಗಿ ಪ್ರತಿ ಗಿಡಕ್ಕೆ ರೂ.1,911/-ರಂತೆ ಪಡೆದು ನಿಯಮಾನುಸಾರ ಸೂಕ್ತ ಲೆಕ್ಕ ಶೀರ್ಷಿಕೆಗೆ ಜಮಾ ಮಾಡಲು ಕ್ರಮ ಜರುಗಿಸುವಂತೆ ಕಟ್ಟುನಿಟ್ಟಾಗಿ ಸೂಚಿಸಿದೆ.
2. ಪ್ರತಿಯನ್ನು, ಯೋಜನಾ ನಿರ್ದೇಶಕರು, ಯೋಜನಾ ಅನುಷ್ಠಾನ ಘಟಕ, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಕೆ.ಆರ್.ವೃತ್ತ, ಬೆಂಗಳೂರು ಇವರಿಗೆ ಮಾಹಿತಿಗಾಗಿ ಕಳುಹಿಸುತ್ತಾ, ರಸ್ತೆಬದಿ ನೆಡುತೋಪು ಬೆಳೆಸುವ ಕಾಮಗಾರಿಗೆ 5 ವರ್ಷಗಳ ಪೋಷಣೆ ಸೇರಿದಂತೆ 2015-16ನೇ ಸಾಲಿನಲ್ಲಿ ಕೈಗೊಳ್ಳುವ ಕಾಮಗಾರಿಗಳಿಗೆ ಪ್ರತಿ ಗಿಡಕ್ಕೆ ರೂ.1,911/-ರಂತೆ ವೆಚ್ಚ ಪಾವತಿಸುವುದು.
3. ಪ್ರತಿಯನ್ನು ಮುಖ್ಯ ಅಭಿಯಂತರರು, ಕರ್ನಾಟಕ ರಾಜ್ಯ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ, ನಂ.15/ಬಿ, ಮಿಲ್ಲರ್ ಟ್ಯಾಂಕ್ ಬೆಡ್ ಏರಿಯಾ, ತಿಮ್ಮಯ್ಯ ರೋಡ್ ಕ್ರಾಸ್, ಬೆಂಗಳೂರು – 560 052 ಇವರಿಗೆ ಮಾಹಿತಿಗಾಗಿ ಕಳುಹಿಸುತ್ತಾ, ರಸ್ತೆಬದಿ ನೆಡುತೋಪು ಬೆಳೆಸುವ ಕಾಮಗಾರಿಗೆ 5 ವರ್ಷಗಳ ಪೋಷಣೆ ಸೇರಿದಂತೆ 2015-16ನೇ ಸಾಲಿನಲ್ಲಿ ಕೈಗೊಳ್ಳುವ ಕಾಮಗಾರಿಗಳಿಗೆ ಪ್ರತಿ ಗಿಡಕ್ಕೆ ರೂ.1,911/-ರಂತೆ ವೆಚ್ಚ ಪಾವತಿಸುವುದು.
4. ಪ್ರತಿಯನ್ನು ಕಾರ್ಯಪಾಲಕ ಇಂಜಿನಿಯರ್, ಕರ್ನಾಟಕ ರಾಜ್ಯ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ, ನಂ.16, 3ನೇ ಮುಖ್ಯರಸ್ತೆ, ಡಾಲರ್ಸ್ ಕಾಲೋನಿ, ಗೋಕುಲ್ ರಸ್ತೆ, ಹುಬ್ಬಳ್ಳಿ – 580 030 ಇವರಿಗೆ ಮಾಹಿತಿಗಾಗಿ ಕಳುಹಿಸುತ್ತಾ, ರಸ್ತೆಬದಿ ನೆಡುತೋಪು ಬೆಳೆಸುವ ಕಾಮಗಾರಿಗೆ 5 ವರ್ಷಗಳ ಪೋಷಣೆ ಸೇರಿದಂತೆ 2015-16ನೇ ಸಾಲಿನಲ್ಲಿ ಕೈಗೊಳ್ಳುವ ಕಾಮಗಾರಿಗಳಿಗೆ ಪ್ರತಿ ಗಿಡಕ್ಕೆ ರೂ.1,911/-ರಂತೆ ವೆಚ್ಚ ಪಾವತಿಸುವುದು.
5. ಪ್ರತಿಯನ್ನು ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಕೇಂದ್ರಸ್ಥಾನ ಮತ್ತು ಸಮನ್ವಯ, ಅಭಿವೃದ್ಧಿ, ಅರಣ್ಯ ಸಂರಕ್ಷಣೆ, ಅರಣ್ಯ ಸಂಪನ್ಮೂಲ ಮತ್ತು ನಿರ್ವಹಣೆ, ಮತ್ತು ಸಾಮಾಜಿಕ ಅರಣ್ಯ, ಅರಣ್ಯ ಭವನ, ಬೆಂಗಳೂರು ರವರುಗಳಿಗೆ ಮಾಹಿತಿಗಾಗಿ ಕಳುಹಿಸಿದೆ.